# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ನವೆಂಬರ್ ೧, ೨೦೧೨ (ಕಾರ್ತೀಕ ೧೦, ಶಕ ವರ್ಷ ೧೯೩೪) | ಸಂಚಿಕೆ ೪೩ |
|---|---|---|

## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು

**ಗೃಹ ಸಚಿವಾಲಯ**

**ಸಂಖ್ಯೆ: ಒಇ 166 ಪಿಪಿಇ 2008 (ಭಾಗ–1) ಬೆಂಗಳೂರು, ದಿನಾಂಕ:17. 09.2012.**

**ಅಧಿಸೂಚನೆ**

**ದಿನಾಂಕ: 30.01.2012ರ ರಾಜ್ಯಪತ್ರದ ವಿಶೇಷ ಪತ್ರಿಕೆ ಭಾಗ IV-A ಸಂಖ್ಯೆ: 69ರಲ್ಲಿ ಪ್ರಕಟವಾದ ಆಂಗ್ಲ ಭಾಷೆಯ ಅಧಿಸೂಚನೆಯನ್ನು ಭಾಷಾಂತರ ಇಲಾಖೆಯು ಕನ್ನಡಕ್ಕೆ ಭಾಷಾಂತರಿಸಿರುವ ಅಧಿಸೂಚನೆ**

ಕರ್ನಾಟಕ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖಾ (ನೇಮಕಾತಿ) ನಿಯಮಗಳು, 2011ರ ಕರಡು ನಿಯಮಗಳನ್ನು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14)ರ 3ನೇ ಪ್ರಕರಣದ (2)ನೇ ಉಪ ಪ್ರಕರಣದಿಂದ ಅಗತ್ಯಪಡಿಸಿದಂತೆ, ಅದರಿಂದ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳಿಂದ, ಅದನ್ನು ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಹದಿನೈದು ದಿನಗಳ ಒಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ದಿನಾಂಕ 23ನೇ ನವೆಂಬರ್ 2011ರ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV–ಎ ರಲ್ಲಿ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 166 ಪಿಪಿಇ 2008, ದಿನಾಂಕ: 23–11–2011ರಲ್ಲಿ ಪ್ರಕಟಿಸಿದ್ದುದರಿಂದ;

ಮತ್ತು ಸದರಿ ರಾಜ್ಯಪತ್ರವನ್ನು 23ನೇ ನವೆಂಬರ್ 2011ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿದ್ದುದರಿಂದ;

ಮತ್ತು ರಾಜ್ಯ ಸರ್ಕಾರವು ಸದರಿ ಕರಡಿನ ಸಂಬಂಧದಲ್ಲಿ ಮೇಲೆ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಸ್ವೀಕರಿಸಿದ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಪರಿಗಣಿಸಿರುವುದರಿಂದ;

ಈಗ, ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14) 8ನೇ ಪ್ರಕರಣದೊಂದಿಗೆ ಓದಲಾದ 3ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

## ನಿಯಮಗಳು

1. **ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖಾ (ನೇಮಕಾತಿ) ನಿಯಮಗಳು, 2012 ಎಂದು ಕರೆಯತಕ್ಕದ್ದು.

(2) ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಿಂದ ಅವು ಜಾರಿಗೆ ಬರತಕ್ಕದ್ದು.

2. **ಪರಿಭಾಷೆಗಳು.–** ಈ ನಿಯಮಗಳಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಅನುಬಂಧ" ಎಂದರೆ, ಈ ನಿಯಮಗಳಿಗೆ ಸೇರಿಸಲಾದ "ಅನುಬಂಧ":

(ಬಿ) "ಸರ್ಕಾರಿ ಅಭಿಯೋಜಕರು" ಎಂದರೆ, ದಂಡ ಪ್ರಕ್ರಿಯಾ ಸಂಹಿತೆ, 1973 (1974ರ ಕೇಂದ್ರ ಅಧಿನಿಯಮ 2) ರ 24ನೇ ಪ್ರಕರಣದ (4)ನೇ ಉಪ ಪ್ರಕರಣದ ಅಡಿಯಲ್ಲಿ ನೇಮಕಗೊಂಡ ಸರ್ಕಾರಿ ಅಭಿಯೋಜಕರುಗಳನ್ನು ಹೊರತುಪಡಿಸಿ, ಈ ನಿಯಮಗಳ ಅಡಿಯಲ್ಲಿ ನೇಮಕಗೊಂಡ ಸರ್ಕಾರಿ ಅಭಿಯೋಜಕರು.

3. **ನೇಮಕಾತಿಯ ವಿಧಾನ ಮತ್ತು ಕನಿಷ್ಠ ಅರ್ಹತೆ.–** ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳಲ್ಲಿನ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖಾ ಸಿಬ್ಬಂದಿಯು ಈ ಕೆಳಗಿನ ಅನುಸೂಚಿಯ (2)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ವೇತನ ಶ್ರೇಣಿಯನ್ನು ಹೊಂದಿರುವ ಹುದ್ದೆಗಳ ಪ್ರತಿಯೊಂದು ಪ್ರವರ್ಗವನ್ನು ಒಳಗೊಂಡಿರತಕ್ಕದ್ದು ಮತ್ತು ಹುದ್ದೆಗಳ ಸಂಖ್ಯೆ, ನೇಮಕಾತಿ ವಿಧಾನ ಮತ್ತು ಕನಿಷ್ಠ ಅರ್ಹತೆ, ಯಾವುದಾದರೂ ಇದ್ದರೆ, ಅದು ಅನುಸೂಚಿಯ (3), (4), (5), (6), (7) ಮತ್ತು (8)ನೇ ಅಂಕಣದಲ್ಲಿನ ಸಂವಾದಿ ನಮೂದುಗಳಲ್ಲಿ ನಿರ್ದಿಷ್ಟಪಡಿಸಿದಂತಿರತಕ್ಕದ್ದು.

4. **ನಿರಸನ ಮತ್ತು ಉಳಿಸುವಿಕೆಗಳು.–** ಕರ್ನಾಟಕ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖಾ (ನೇಮಕಾತಿ) ನಿಯಮಗಳು, 1982ನ್ನು ಈ ಮೂಲಕ ನಿರಸನಗೊಳಿಸಲಾಗಿದೆ:

ಪರಂತು, ಅಂಥ ನಿರಸನವು.–

(ಎ) ಸದರಿ ನಿಯಮಗಳ ಈ ಹಿಂದಿನ ಪ್ರವರ್ತನೆಗೆ ಅಥವಾ ಅದರ ಅಡಿಯಲ್ಲಿ ಯುಕ್ತವಾಗಿ ಮಾಡಿದ ಯಾವುದೇ ಕಾರ್ಯಕ್ಕೆ ಅಥವಾ ಕೈಗೊಳ್ಳಲಾದ ಯಾವುದೇ ಕ್ರಮಕ್ಕೆ; ಅಥವಾ

(ಬಿ) ಸದರಿ ನಿಯಮಗಳ ಅಡಿಯಲ್ಲಿ ಅರ್ಜಿಸಿದ, ಪ್ರಾಪ್ತವಾದ ಅಥವಾ ವಹಿಸಿದ ಯಾವುದೇ ಹಕ್ಕಿಗೆ, ವಿಶೇಷಾಧಿಕಾರಕ್ಕೆ, ಬಾಧ್ಯತೆಗೆ ಅಥವಾ ಹೊಣೆಗಾರಿಕೆ – ಬಾಧಕ ಉಂಟುಮಾಡತಕ್ಕದ್ದಲ್ಲ.

**ಅನುಸೂಚಿ**

| ಕ್ರಮ ಸಂಖ್ಯೆ | ಹುದ್ದೆಗಳ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | | ನೇಮಕಾತಿ ವಿಧಾನ | ಕನಿಷ್ಠ ಅರ್ಹತೆ |
|---|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಪ್ರತಿನಿಯೋಜನೆ ಮೀಸಲು | ಒಟ್ಟು | | |
| (1) | (2) | (3) | (4) | (5) | (6) | (7) | (8) |
| 01 | ಅಭಿಯೋಗ ನಿರ್ದೇಶಕರು, (ರೂ.26250–36500ಗಳು) | 01 | – | – | 01 | ಕರ್ನಾಟಕ ಉಚ್ಚ ನ್ಯಾಯಾಲಯದ ಗೌರವಾನ್ವಿತ ಮುಖ್ಯ ನ್ಯಾಯ ಮೂರ್ತಿಯವರ ಸಹಮತಿ ಪಡೆದು ಅಭಿಯೋಜನಾ ಇಲಾಖೆಯ ಉಪ ನಿರ್ದೇಶಕರ ವೃಂದದಿದ ಆಯ್ಕೆ ಮಾಡಿ ಮುಂಬಡ್ತಿ ನೀಡುವ ಮೂಲಕ. | ಮುಂಬಡ್ತಿಗಾಗಿ.– ನ್ಯಾಯವಾದಿಯಾಗಿ ಹತ್ತು ವರ್ಷಗಳಿಗೆ ಕಡಿಮೆ ಇಲ್ಲದಂತೆ ವೃತ್ತಿ ನಿರತ ಸೇವೆಯನ್ನು ಮತ್ತು ಅಭಿಯೋಜನಾ ಇಲಾಖೆಯ ಉಪ ನಿರ್ದೇಶಕರ ವೃಂದದಲ್ಲಿ ಕನಿಷ್ಠ ಎರಡು ವರ್ಷಗಳ ಸೇವೆಯನ್ನು ಸಲ್ಲಿಸಿರಬೇಕು. |
| 02 | ಅಭಿಯೋಗ ಉಪ ನಿರ್ದೇಶಕರ (ರೂ.20025–28275ಗಳು) (ಅಭಿಯೋಗಗಳ ಹಾಲಿ ಜಂಟಿ ನಿರ್ದೇಶಕರ ಹುದ್ದೆಯನ್ನು ತಿದ್ದುಪಡಿ ನಿಯಮಗಳು ಯಾವ ದಿನಾಂಕದಿಂದ ಜಾರಿಗೆ ಬರುವುದೋ ಆ ದಿನಾಂಕದಿಂದ ಪರಿಣಾಮಕಾರಿಯಾಗುವಂತೆ ಅಭಿಯೋಗ ಉಪ ನಿರ್ದೇಶಕರೆಂದು ಮರು ಪದನಾಮೀಕರಿಸಲಾಗಿದೆ.) | 03 | – | 01 | 04 | ಕರ್ನಾಟಕ ಉಚ್ಚ ನ್ಯಾಯಾಲಯದ ಗೌರವಾನ್ವಿತ ಮುಖ್ಯ ನ್ಯಾಯಮೂರ್ತಿಯವರ ಸಹಮತಿ ಪಡೆದು ಸರ್ಕಾರಿ ಅಭಿಯೋಜಕರು / ಕಾನೂನು ಅಧಿಕಾರಿ (ಹಿರಿಯ) ವೃಂದದಿಂದ ಆಯ್ಕೆ ಮಾಡಿ ಮುಂಬಡ್ತಿ ನೀಡುವ ಮೂಲಕ. | ವೃತ್ತಿ ನಿರತ ನ್ಯಾಯವಾದಿಯಾಗಿ ಹತ್ತು ವರ್ಷ ಗಳಿಗಿಂತ ಕಡಿಮೆಯಿಲ್ಲದಂತೆ ಮತ್ತು ಸರ್ಕಾರಿ ಅಭಿಯೋಜಕರು / ಕಾನೂನು ಅಧಿಕಾರಿ (ಹಿರಿಯ) ವೃಂದದಲ್ಲಿ ಕನಿಷ್ಠ ಎರಡು ವರ್ಷಗಳ ಸೇವೆಯನ್ನು ಸಲ್ಲಿಸಿರಬೇಕು. |
| 03 | ಸರ್ಕಾರಿ ಅಭಿಯೋಜಕರು / ಕಾನೂನು ಅಧಿಕಾರಿ (ಹಿರಿಯ) (ರೂ.18150–26925) (ಅಭಿಯೋಗಗಳ ಹಾಲಿ ಸರ್ಕಾರಿ ಅಭಿಯೋಜಕರು ಉಪ ನಿರ್ದೇಶಕರ | 37 | 162 | 06 | 205 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು / ಕಾನೂನು ಅಧಿಕಾರಿ (ಕಿರಿಯ) ವೃಂದದಿಂದ ಮುಂಬಡ್ತಿ ಮೂಲಕ. | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು / ಕಾನೂನು ಅಧಿಕಾರಿ (ಕಿರಿಯ) ವೃಂದದಲ್ಲಿ ಐದು ವರ್ಷಗಳಿಗೆ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರಬೇಕು. |

| ಕ್ರಮ ಸಂಖ್ಯೆ | ಹುದ್ದೆಗಳ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | | ನೇಮಕಾತಿ ವಿಧಾನ | ಕನಿಷ್ಠ ಅರ್ಹತೆ |
|---|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಪ್ರತಿನಿಯೋಜನೆ ಮೀಸಲು | ಒಟ್ಟು | | |
| (1) | (2) | (3) | (4) | (5) | (6) | (7) | (8) |
| | ಹುದ್ದೆಯನ್ನು ತಿದ್ದುಪಡಿ ನಿಯಮಗಳು ಯಾವ ದಿನಾಂಕದಿಂದ ಜಾರಿಗೆ ಬರುವುದೋ ಆ ದಿನಾಂಕದಿಂದ ಪರಿಣಾಮಕಾರಿಯಾಗುವಂತೆ ಸರ್ಕಾರಿ ಅಭಿಯೋಜಕರು / ಕಾನೂನು ಅಧಿಕಾರಿ (ಹಿರಿಯ) ಎಂದು ಮರು ಪದನಾಮೀಕರಿಸಲಾಗಿದೆ.) | | | | | ಟಿಪ್ಪಣಿ: ಒಬ್ಬ ಸರ್ಕಾರಿ ಅಭಿಯೋಜಕರನ್ನು ನ್ಯಾಯಾಲಯವನ್ನು ಹೊರತುಪಡಿಸಿದ ಒಂದು ಸ್ಥಳದಲ್ಲಿ ಕಾರ್ಯ ನಿರ್ವಹಿಸಲು ಸ್ಥಳ ನಿಯುಕ್ತಿಗೊಳಿಸಿದಾಗ ಕಾನೂನು ಅಧಿಕಾರಿ (ಹಿರಿಯ) ಎಂದು ಕರೆಯತಕ್ಕದ್ದು. | |
| 04 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು / ಕಾನೂನು ಅಧಿಕಾರಿ (ಕಿರಿಯ) (ರೂ.14050–25050) (ಅಭಿಯೋಗಗಳ ಹಾಲಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು / ಸಹಾಯಕ ನಿರ್ದೇಶಕರ ಹುದ್ದೆಯನ್ನು ತಿದ್ದುಪಡಿ ನಿಯಮಗಳು ಜಾರಿಗೆ ಬರುವ ದಿನಾಂಕದಿಂದ ಪರಿಣಾಮಕಾರಿಯಾಗುವಂತೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು / ಕಾನೂನು ಅಧಿಕಾರಿ (ಕಿರಿಯ) ಎಂದು ಮರು ಪದನಾಮೀಕರಿಸಲಾಗಿದೆ.) | 77 | 39 | 05 | 121 | ಸಹಾಯಕ ಸರ್ಕಾರಿ ಅಭಿಯೋಜಕರ ವೃಂದದಿಂದ ಮುಂಬಡ್ತಿ ಮೂಲಕ.<br>ಟಿಪ್ಪಣಿ: ಒಬ್ಬ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರನ್ನು ನ್ಯಾಯಾಲಯವನ್ನು ಹೊರತುಪಡಿಸಿದ ಒಂದು ಸ್ಥಳದಲ್ಲಿ ಕಾರ್ಯ ನಿರ್ವಹಿಸಲು ಸ್ಥಳ ನಿಯುಕ್ತಿಗೊಳಿಸಿದಾಗ ಕಾನೂನು ಅಧಿಕಾರಿ (ಕಿರಿಯ) ಎಂದು ಕರೆಯತಕ್ಕದ್ದು. | ಸಹಾಯಕ ಸರ್ಕಾರಿ ಅಭಿಯೋಜಕರ ವೃಂದದಲ್ಲಿ ಐದು ವರ್ಷಗಳಿಗೆ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರಬೇಕು. |
| 05 | ಕೇಂದ್ರ ಸ್ಥಾನಿಕ ಸಹಾಯಕ (ರೂ. 14050–25050) | 01 | – | – | 01 | ಆಡಳಿತಾಧಿಕಾರಿ ವೃಂದದಿಂದ ಮುಂಬಡ್ತಿ ಮೂಲಕ. | ಆಡಳಿತಾಧಿಕಾರಿ ವೃಂದದಲ್ಲಿ ಮೂರು ವರ್ಷಗಳಿಗೆ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರಬೇಕು. |

| ಕ್ರಮ ಸಂಖ್ಯೆ | ಹುದ್ದೆಗಳ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | | ನೇಮಕಾತಿ ವಿಧಾನ | ಕನಿಷ್ಠ ಅರ್ಹತೆ |
|---|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಪ್ರತಿನಿಯೋಜನೆ ಮೀಸಲು | ಒಟ್ಟು | | |
| (1) | (2) | (3) | (4) | (5) | (6) | (7) | (8) |
| 06 | ಸಹಾಯಕ ಸರ್ಕಾರಿ ಅಭಿಯೋಜಕರು – ಹಾಗೂ–ಸಹಾಯಕ ಸರ್ಕಾರಿ ವಕೀಲರು (ರೂ.11400–21600) | 202 | 165 | – | 367 | ಅನುಬಂಧ– I, II ಮತ್ತು IIIರಲ್ಲಿ ನಿರ್ದಿಷ್ಟಪಡಿಸಿದ ಪ್ರಕ್ರಿಯೆಗನುಸಾರವಾಗಿ ನೇರ ನೇಮಕಾತಿ ಮೂಲಕ. ಭಾರತದ ಸಿವಿಲ್ ಮತ್ತು ಕ್ರಿಮಿನಲ್ ಅಧಿಕಾರ ವ್ಯಾಪ್ತಿಯ ನ್ಯಾಯಾಲಯಗಳಲ್ಲಿ ನ್ಯಾಯವಾದಿಯಾಗಿ ವೃತ್ತಿ ನಡೆಸಿರಬೇಕು ಮತ್ತು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಮೂರು ವರ್ಷಗಳಿಗೆ ಕಡಿಮೆ ಇಲ್ಲದಂತೆ ಹಾಗೆ ನ್ಯಾಯವಾದಿಯಾಗಿ ವೃತ್ತಿ ನಡೆಸಿರಬೇಕು. | ನೇರ ನೇಮಕಾತಿಗಾಗಿ.– ನ್ಯಾಯವಾದಿಗಳ ಅಧಿನಿಯಮ, 1961ರ ಉಪಬಂಧಗಳ ಅಡಿಯಲ್ಲಿ ನ್ಯಾಯವಾದಿ ಯಾಗಿರಬೇಕು. ಕರ್ನಾಟಕ ಸಿವಿಲ್ ಸೇವೆಗಳ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರಲ್ಲಿ ಏನೇ ಇದ್ದರೂ, ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಯಾರೇ ವ್ಯಕ್ತಿಗೆ 25 ವರ್ಷ ವಯಸ್ಸು ಆಗಿರಬೇಕು ಮತ್ತು ಅನುಸೂಚಿತ ಜಾತಿ / ಅನುಸೂಚಿತ ಪಂಗಡದ ಅಥವಾ ಹಿಂದುಳಿದ ವರ್ಗಗಳ ಪ್ರವರ್ಗ– Iರ ವ್ಯಕ್ತಿಗಳಿಗೆ 42 ವರ್ಷ ವಯಸ್ಸು, ಇತರ ಹಿಂದುಳಿದ ವರ್ಗದ ಪ್ರವರ್ಗ IIಎ, IIಬಿ, ಅಥವಾ IIIಎ, IIIಬಿಗೆ ಸೇರಿದ ವ್ಯಕ್ತಿಗಳ ಸಂದರ್ಭದಲ್ಲಿ 40 ವರ್ಷ ವಯಸ್ಸು ಮತ್ತು ಇತರ ಯಾರೇ ವ್ಯಕ್ತಿಯ ಸಂದರ್ಭದಲ್ಲಿ 37 ವರ್ಷ ವಯಸ್ಸು ತುಂಬಿರಬಾರದು. |
| 07 | ಆಡಳಿತಾಧಿಕಾರಿಗಳು (ರೂ.10800–20025) | 10 | 01 | – | 11 | ಅಧೀಕ್ಷಕರ ವೃಂದದಿಂದ ಮುಂಬಡ್ತಿ ಮೂಲಕ | ಮುಂಬಡ್ತಿಗಾಗಿ.– ಅಧೀಕ್ಷಕರ ವೃಂದದಲ್ಲಿ ಮೂರು ವರ್ಷಗಳಿಗೆ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರಬೇಕು. |

| ಕ್ರಮ ಸಂಖ್ಯೆ | ಹುದ್ದೆಗಳ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | | ನೇಮಕಾತಿ ವಿಧಾನ | ಕನಿಷ್ಠ ಅರ್ಹತೆ |
|---|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಪ್ರತಿನಿಯೋಜನೆ ಮೀಸಲು | ಒಟ್ಟು | | |
| (1) | (2) | (3) | (4) | (5) | (6) | (7) | (8) |
| 08 | ಅಧೀಕ್ಷಕರು (ರೂ.10000–18150) | 38 | 02 | – | 20 | ಪ್ರಥಮ ದರ್ಜೆ ಸಹಾಯಕರು, ಶೀಘ್ರಲಿಪಿಗಾರರು ಮತ್ತು ಹಿರಿಯ ಬೆರಳಚ್ಚುಗಾರರ ವೃಂದದಿಂದ 1:5:1ರ ಅನುಪಾತದಲ್ಲಿ ಮುಂಬಡ್ತಿ ಮೂಲಕ, ಪ್ರತಿ ಎರಡನೇ ಖಾಲಿ ಸ್ಥಾನವನ್ನು ಶೀಘ್ರಲಿಪಿಗಾರರ ಮುಂಬಡ್ತಿ ಮೂಲಕ ಮತ್ತು ಮೂರನೇ ಖಾಲಿ ಸ್ಥಾನವನ್ನು ಹಿರಿಯ ಬೆರಳಚ್ಚು ಗಾರರ ಮುಂಬಡ್ತಿ ಮೂಲಕ ತುಂಬಬೇಕು. | ಸಂದರ್ಭಾನುಸಾರ ಪ್ರಥಮ ದರ್ಜೆ ಸಹಾಯಕರ / ಶೀಘ್ರಲಿಪಿಗಾರರ / ಹಿರಿಯ ಬೆರಳಚ್ಚುಗಾರರ ವೃಂದದಲ್ಲಿ ಮೂರು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರಬೇಕು.<br>ಶೀಘ್ರಲಿಪಿಗಾರರ / ಹಿರಿಯ ಬೆರಳಚ್ಚುಗಾರರ ಸಂದರ್ಭದಲ್ಲಿ ಅವರು ಜ್ಯೇಷ್ಠತೆಗನುಸಾರವಾಗಿ ಪ್ರಥಮ ದರ್ಜೆ ಸಹಾಯಕರಾಗಿ ಒಂದು ವರ್ಷಕ್ಕೆ ಕಡಿಮೆಯಿಲ್ಲದಂತೆ ಕಾರ್ಯನಿರ್ವಹಿಸಿರಬೇಕು. |
| 09 | ಪ್ರಥಮ ದರ್ಜೆ ಸಹಾಯಕರು (ರೂ.7275–13350) | 50 | 14 | – | 64 | ಕರ್ನಾಟಕ ಸಿವಿಲ್ ಸೇವೆಗಳ (ಲಿಪಿಕ ಹುದ್ದೆ ಗಳಿಗೆ ನೇಮಕಾತಿ) ನಿಯಮಗಳು, 1978ರ ಅನುಸಾರವಾಗಿ ಶೇಕಡಾ ಐವತ್ತರಷ್ಟು ನೇರ ನೇಮಕಾತಿ ಮೂಲಕ ಮತ್ತು ದ್ವಿತೀಯ ದರ್ಜೆ ಸಹಾಯಕರ ವೃಂದದಿಂದ ಶೇಕಡಾ ಐವತ್ತರಷ್ಟು ಮುಂಬಡ್ತಿ ಮೂಲಕ. | ಮುಂಬಡ್ತಿಗಾಗಿ.–<br>ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಮೂರು ವರ್ಷಗಳಿಗೆ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರಬೇಕು. |

| ಕ್ರಮ ಸಂಖ್ಯೆ | ಹುದ್ದೆಗಳ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | | ನೇಮಕಾತಿ ವಿಧಾನ | ಕನಿಷ್ಠ ಅರ್ಹತೆ |
|---|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಪ್ರತಿನಿಯೋಜನೆ ಮೀಸಲು | ಒಟ್ಟು | | |
| (1) | (2) | (3) | (4) | (5) | (6) | (7) | (8) |
| 10 | ಶೀಘ್ರಲಿಪಿಗಾರರು (ರೂ.7275–13350) | 84 | 505 | – | 589 | (1) ಕರ್ನಾಟಕ ಸಿವಿಲ್ ಸೇವೆಗಳ (ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಹುದ್ದೆಗಳಿಗೆ ನೇಮಕಾತಿ) ನಿಯಮಗಳು, 1983ರ ಅನುಸಾರವಾಗಿ ಶೇಕಡಾ ಐವತ್ತರಷ್ಟು ನೇರ ನೇಮಕಾತಿ ಮೂಲಕ<br>(2) ಈ ಹುದ್ದೆಗಳ ಪೈಕಿ ಶೇಕಡಾ 25ರಷ್ಟನ್ನು, (8ನೇ ಅಂಕಣದಲ್ಲಿ ಗೊತ್ತುಪಡಿಸಿದ ಅರ್ಹತೆಗನುಸಾರವಾಗಿ ನೇರ ನೇಮಕಾತಿ ಮೂಲಕ<br>(3) ಶೇಕಡಾ 25ರಷ್ಟು ಬೆರಳಚ್ಚುಗಾರರ ವೃಂದದಿಂದ ಮುಂಬಡ್ತಿ ಮೂಲಕ | ನೇರ ನೇಮಕಾತಿಗಾಗಿ.–<br>ಕರ್ನಾಟಕ ಸಿವಿಲ್ ಸೇವೆಗಳ (ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಹುದ್ದೆಗಳಿಗೆ ನೇಮಕಾತಿ ನಿಯಮಗಳು, 1983ರಲ್ಲಿ ಏನೇ ಇದ್ದರೂ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು (ಕೆಎಸ್ಇಇಬಿ) ನಡೆಸುವ ಹಿರಿಯ ಬೆರಳಚ್ಚು ಮತ್ತು ಹಿರಿಯ ಶೀಘ್ರಲಿಪಿ ಪರೀಕ್ಷೆಗಳನ್ನು ಕನ್ನಡ ಮತ್ತು ಇಂಗ್ಲೀಷ್ ಭಾಷೆ ಎರಡರಲ್ಲೂ ತೇರ್ಗಡೆಯಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು.<br>ಮುಂಬಡ್ತಿಗಾಗಿ–<br>(1) ಬೆರಳಚ್ಚುಗಾರರ ವೃಂದದಲ್ಲಿ ಐದು ವರ್ಷಗಳಿಗೆ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರಬೇಕು.<br>(2) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ (ಕೆಎಸ್ಇಇಬಿ)ಯು ಕನ್ನಡ ಭಾಷೆಯಲ್ಲಿ ನಡೆಸುವ ಹಿರಿಯ ಶೀಘ್ರಲಿಪಿ ಮತ್ತು ಹಿರಿಯ ಬೆರಳಚ್ಚು ಪರೀಕ್ಷೆಗಳಲ್ಲಿ ತೇರ್ಗಡೆಯಾಗಿರಬೇಕು. ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು. |
| 11 | ಸಹಾಯಕ ಗ್ರಂಥಪಾಲಕ (ರೂ.7275–13350) | – | 01 | – | 01 | ಗ್ರಂಥಾಲಯಗಳ ಇಲಾಖೆಯಿಂದ ಪ್ರತಿನಿಯೋಜನೆ ಮೂಲಕ | – |

| ಕ್ರಮ ಸಂಖ್ಯೆ | ಹುದ್ದೆಗಳ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ ಕಾಯಂ | ತಾತ್ಕಾಲಿಕ | ಪ್ರತಿನಿಯೋಜನೆ ಮೀಸಲು | ಒಟ್ಟು | ನೇಮಕಾತಿ ವಿಧಾನ | ಕನಿಷ್ಠ ಅರ್ಹತೆ |
|---|---|---|---|---|---|---|---|
| (1) | (2) | (3) | (4) | (5) | (6) | (7) | (8) |
| 12 | ಹಿರಿಯ ಬೆರಳಚ್ಚುಗಾರರು (ರೂ.7275–13350) | 37 | – | – | 37 | ಪದಧಾರಿಯು ನಿವೃತ್ತಿ ಹೊಂದಿದಾಗ ಈ ವೃಂದವನ್ನು ರದ್ದುಗೊಳಿಸಲಾಗುವುದು. | – |
| 13 | ದ್ವಿತೀಯ ದರ್ಜೆ ಸಹಾಯಕರು (ರೂ.5800–10500) | 50 | 14 | – | 64 | (1) ಕರ್ನಾಟಕ ಸಿವಿಲ್ ಸೇವೆಗಳ (ಲಿಪಿಕ ಹುದ್ದೆ ಗಳಿಗೆ ನೇಮಕಾತಿ) ನಿಯಮಗಳು, 1978ರ ಅನುಸಾರವಾಗಿ ಶೇಕಡಾ ಎಪ್ಪತ್ತೈದರಷ್ಟು ನೇರ ನೇಮಕಾತಿ ಮೂಲಕ; ಮತ್ತು<br>(2) ಅರ್ಹ ಚಾಲಕರ ವೃಂದದಿಂದ ಶೇಕಡಾ ಇಪ್ಪತ್ತೈದರಷ್ಟು ವರ್ಗಾವಣೆ ಮೇಲೆ, ಅರ್ಹ ಚಾಲಕರು ದೊರೆಯದಿದ್ದಲ್ಲಿ, ಆಗ ಗ್ರೂಪ್–ಡಿ ಸೇವೆಗಳಲ್ಲಿನ ಯಾವುದೇ ವೃಂದಗಳಿಂದ ಮತ್ತು ಜ್ಯೇಷ್ಠತೆಯ ಆಧಾರದ ಮೇಲೆ ಚಾಲಕರ ವೃಂದದಿಂದ ಮುಂಬಡ್ತಿ ಮೂಲಕ ಹೆಚ್ಚಿನ ವೇತನ ಶ್ರೇಣಿ ಹೊಂದಿರುವ ಹುದ್ದೆಯನ್ನು ಧಾರಣ ಮಾಡಿರುವ ವ್ಯಕ್ತಿಯನ್ನು ಕಡಿಮೆ ವೇತನ ಶ್ರೇಣಿ ಹೊಂದಿರುವ ವ್ಯಕ್ತಿಗಿಂತ ಜ್ಯೇಷ್ಠನೆಂದು ಪರಿಗಣಿಸಲಾಗುವುದು. ಒಂದೇ ವೇತನ ಶ್ರೇಣಿ ಹೊಂದಿರುವ ಹುದ್ದೆಯನ್ನು ಧಾರಣ ಮಾಡಿರುವ ವ್ಯಕ್ತಿಗಳ ಪೈಕಿ ಪರಸ್ಪರ ಜ್ಯೇಷ್ಠತೆಯನ್ನು ಸಂಬಂಧಪಟ್ಟ ವೃಂದಗಳಲ್ಲಿ ಸಲ್ಲಿಸಿದ ದೀರ್ಘಾವಧಿ ಸೇವೆಯ ಆಧಾರದ ಮೇಲೆ ನಿರ್ಧರಿಸಲಾಗುವುದು. | ಮುಂಬಡ್ತಿಗಾಗಿ.–<br>(1) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು; ಮತ್ತು<br>(2) ಚಾಲಕರ ವೃಂದದಲ್ಲಿ ಅಥವಾ ಗ್ರೂಪ್–ಡಿ ಸೇವೆಯಲ್ಲಿನ ಯಾವುದೇ ಒಂದು ಅಥವಾ ಹೆಚ್ಚು ವೃಂದದಲ್ಲಿ ಏಳು ವರ್ಷಗಳಿಗೆ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರಬೇಕು. |
| 14 | ಬೆರಳಚ್ಚುಗಾರರು (ರೂ.5800–10500) | 118 | 192 | – | 310 | ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶೀಘ್ರಲಿಪಿ ಗಾರರ ಮತ್ತು ಬೆರಳಚ್ಚುಗಾರರ ಹುದ್ದೆಗೆ ನೇಮಕಾತಿ) ನಿಯಮಗಳು, 1983ರ ಅಡಿಯಲ್ಲಿ ನೇರ ನೇಮಕಾತಿ | ನೇಮಕಾತಿ.–<br>ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶೀಘ್ರಲಿಪಿ ಗಾರರು ಮತ್ತು ಬೆರಳಚ್ಚುಗಾರರ ಹುದ್ದೆಗೆ ನೇಮಕಾತಿ) |

| ಕ್ರಮ ಸಂಖ್ಯೆ | ಹುದ್ದೆಗಳ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | | ನೇಮಕಾತಿ ವಿಧಾನ | ಕನಿಷ್ಠ ಅರ್ಹತೆ |
|---|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಪ್ರತಿನಿಯೋಜನೆ ಮೀಸಲು | ಒಟ್ಟು | | |
| (1) | (2) | (3) | (4) | (5) | (6) | (7) | (8) |
| | | | | | | ಮೂಲಕ ಹಿರಿಯ / ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಯಲ್ಲಿನ ಬೆರಳಚ್ಚುಗಾರರ ಹುದ್ದೆಗಳನ್ನು ಪದಧಾರಿಯು ನಿವೃತ್ತಿ ಹೊಂದಿದಾಗ ರದ್ದುಗೊಳಿಸಲಾಗುವುದು. | ನಿಯಮಗಳು, 1983ರಲ್ಲಿ ಏನೇ ಇದ್ದರೂ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ಕನ್ನಡ ಮತ್ತು ಇಂಗ್ಲೀಷ್ ಭಾಷೆ ಎರಡರಲ್ಲೂ ನಡೆಸುವ ಹಿರಿಯ ಬೆರಳಚ್ಚು ಪರೀಕ್ಷೆ ಗಳಲ್ಲಿ ತೇರ್ಗಡೆಯಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು. |
| 15 | ಚಾಲಕರು (ರೂ.5800–10500) | 02 | 02 | – | 04 | ಸಂಯೋಜಿತ ಜ್ಯೇಷ್ಠತೆಯ ಆಧಾರದ ಮೇಲೆ ಗ್ರೂಪ್ –"ಡಿ" ವೃಂದದಿಂದ ಶೇಕಡಾ ಎಪ್ಪತ್ತೈದರಷ್ಟು ನೇರ ನೇಮಕಾತಿ ಮೂಲಕ ಮತ್ತು ಶೇಕಡಾ ಇಪ್ಪತ್ತೈದರಷ್ಟು ಮುಂಬಡ್ತಿ ಮೂಲಕ, ಹೆಚ್ಚಿನ ವೇತನ ಶ್ರೇಣಿ ಹೊಂದಿರುವ ಹುದ್ದೆಯನ್ನು ಧಾರಣ ಮಾಡಿರುವ ವ್ಯಕ್ತಿಯನ್ನು ಕಡಿಮೆ ವೇತನ ಶ್ರೇಣಿ ಹೊಂದಿರುವ ವ್ಯಕ್ತಿಗಿಂತ ಜ್ಯೇಷ್ಠನೆಂದು ಪರಿಗಣಿಸಲಾಗುವುದು. ಒಂದೇ ವೇತನ ಶ್ರೇಣಿ ಹೊಂದಿರುವ ಹುದ್ದೆಯನ್ನು ಧಾರಣ ಮಾಡಿರುವ ವ್ಯಕ್ತಿಗಳ ಪೈಕಿ ಪರಸ್ಪರ ಜ್ಯೇಷ್ಠತೆಯನ್ನು ಸಂಬಂಧಪಟ್ಟ ವೃಂದಗಳಲ್ಲಿ ಸಲ್ಲಿಸಿದ ದೀರ್ಘಾವಧಿ ಸೇವೆಯ ಆಧಾರದ ಮೇಲೆ ನಿರ್ಧರಿಸಲಾಗುವುದು. ಮುಂಬಡ್ತಿಗಾಗಿ ಯಾವ ಸೂಕ್ತ ವ್ಯಕ್ತಿಯೂ ಲಭ್ಯವಿಲ್ಲದಿರುವಲ್ಲಿ, ನೇರ ನೇಮಕಾತಿ ಮೂಲಕ. | ನೇರ ನೇಮಕಾತಿ ಮೂಲಕ.–<br>ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ತೇರ್ಗಡೆ ಯಾಗಿರಬೇಕು ಮತ್ತು ಸಕ್ಷಮ ಪ್ರಾಧಿಕಾರವು ನೀಡಿದ ಚಾಲ್ತಿ ಲಘು ಮೋಟಾರು ವಾಹನಗಳ ಲೈಸೆನ್ಸ್ ಅನ್ನು ಹೊಂದಿರಬೇಕು.<br>ಮುಂಬಡ್ತಿಗಾಗಿ.–<br>(1) ಏಳನೇ ತರಗತಿಯಲ್ಲಿ ತೇರ್ಗಡೆಯಾಗಿರಬೇಕು; ಮತ್ತು<br>(2) ಸಕ್ಷಮ ಪ್ರಾಧಿಕಾರವು ನೀಡಿದ ಲಘು ಮೋಟಾರು ವಾಹನಗಳ ಸಿಂಧುವಾದ ಲೈಸೆನ್ಸ್ ಅನ್ನು ಹೊಂದಿರಬೇಕು; ಮತ್ತು<br>(3) ಗ್ರೂಪ್–'ಡಿ' ಯಲ್ಲಿನ ಯಾವುದೇ ಒಂದು ಅಥವಾ ಹೆಚ್ಚು ವೃಂದಗಳಲ್ಲಿ ಐದು ವರ್ಷಗಳಿಗೆ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರಬೇಕು.<br>ಪರಂತು, ಐದು ವರ್ಷಗಳಿಗೆ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರುವ ವ್ಯಕ್ತಿಗಳು ಲಭ್ಯವಿಲ್ಲದಿರುವಲ್ಲಿ, ಮೂರು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರುವ ವ್ಯಕ್ತಿಗಳನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು. |

| ಕ್ರಮ ಸಂಖ್ಯೆ | ಹುದ್ದೆಗಳ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | | ನೇಮಕಾತಿ ವಿಧಾನ | ಕನಿಷ್ಠ ಅರ್ಹತೆ |
|---|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಪ್ರತಿನಿಯೋಜನೆ ಮೀಸಲು | ಒಟ್ಟು | | |
| (1) | (2) | (3) | (4) | (5) | (6) | (7) | (8) |
| 16 | ಅಟೆಂಡರ್‌ಗಳು (ರೂ.5200–8200) | 44 | 7 | – | 51 | ದಲಾಯತರ ವೃಂದದಿಂದ ಮುಂಬಡ್ತಿ ಮೂಲಕ. | ದಲಾಯತರ ವೃಂದದಲ್ಲಿ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರಬೇಕು. |
| 17 | ದಲಾಯತರು/ಜವಾನರು/ ಕಾವಲುಗಾರರು (ರೂ.4800–7275) | 300 | 286 | – | 586 | ನೇರ ನೇಮಕಾತಿ ಮೂಲಕ. | ಏಳನೇ ತರಗತಿಯ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು. |

## ಅನುಬಂಧ–I

ಸಹಾಯಕ ಸರ್ಕಾರಿ ಅಭಿಯೋಜಕರು–ಹಾಗೂ–ಸಹಾಯಕ ಸರ್ಕಾರಿ ವಕೀಲರುಗಳ ಹುದ್ದೆಗಳಿಗಾಗಿ ಅಭ್ಯರ್ಥಿಗಳ ಆಯ್ಕೆಯನ್ನು ನಿಯಂತ್ರಿಸುವ ನಿಯಮಗಳು

1. ಸಹಾಯಕ ಸರ್ಕಾರಿ ಅಭಿಯೋಜಕರುಗಳ–ಹಾಗೂ–ಸಹಾಯಕ ಸರ್ಕಾರಿ ವಕೀಲರುಗಳ ಹುದ್ದೆಗಳಿಗಾಗಿ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಉದ್ದೇಶಕ್ಕಾಗಿ ಸರ್ಕಾರವು ರಚಿಸಿದ ಆಯ್ಕೆ ಸಮಿತಿಯು ಆಯ್ಕೆಯನ್ನು ಮಾಡತಕ್ಕದ್ದು.

2. (ಎ) ಒಬ್ಬ ಅಭ್ಯರ್ಥಿಯು ತನ್ನ ಅರ್ಜಿಯ ಜೊತೆಯಲ್ಲಿ:–

   (i) ಆತನು ವಾಸ್ತವವಾಗಿ ವೃತ್ತಿ ನಡೆಸುತ್ತಿರುವಂಥ ಸಂಬಂಧಪಟ್ಟ ನ್ಯಾಯಾಲಯದಲ್ಲಿನ / ನ್ಯಾಯಾಲಯಗಳಲ್ಲಿನ ಪೀಠಾಸೀನ ಅಧಿಕಾರಿಗಳಿಂದ ಪಡೆದ ಮತ್ತು ಆತನು ಕನಿಷ್ಠ ಪಕ್ಷ ಮೂರು ವರ್ಷಗಳ ಅವಧಿಯಿಂದ ವಾಸ್ತವವಾಗಿ ವೃತ್ತಿ ನಡೆಸುತ್ತಿದ್ದಾರೆಂದು ಕಾಲಾವಧಿಯನ್ನು ಸೂಚಿಸುವ ಒಂದು ಪ್ರಮಾಣ ಪತ್ರವನ್ನು ಹಾಜರುಪಡಿಸತಕ್ಕದ್ದು.

   (ii) ಆತನು ಕೊನೆಯದಾಗಿ ವ್ಯಾಸಂಗ ಮಾಡಿದ ಕಾಲೇಜು ಅಥವಾ ಸಂಸ್ಥೆಯ ಪ್ರಾಂಶುಪಾಲರಿಂದ ಮತ್ತು ಗೆಜೆಟೆಡ್ ಅಧಿಕಾರಿಯಿಂದ ಅಥವಾ ಆತನ ಸಂಬಂಧಿಯಲ್ಲದ ಆದರೆ, ಆತನ ಖಾಸಗಿ ಜೀವನದ ಬಗ್ಗೆ ಚೆನ್ನಾಗಿ ಪರಿಚಯವುಳ್ಳ ಇತರ ಜವಾಬ್ದಾರಿಯುತ ವ್ಯಕ್ತಿಯಿಂದ ಪಡೆದ ಉತ್ತಮ ನಡತೆ ಪ್ರಮಾಣ ಪತ್ರಗಳನ್ನು ಹಾಜರುಪಡಿಸತಕ್ಕದ್ದು.

   (ಬಿ) ಪ್ರತಿಯೊಬ್ಬ ಅಭ್ಯರ್ಥಿಯು, ತನ್ನ ಅರ್ಜಿಯ ಜೊತೆಯಲ್ಲಿ ಆಯ್ಕೆ ಸಮಿತಿಯು ಗೊತ್ತುಪಡಿಸಬಹುದಾದಂಥ ಶುಲ್ಕವನ್ನು ಸಂದಾಯ ಮಾಡತಕ್ಕದ್ದು. ಅಂಥ ಶುಲ್ಕವಿಲ್ಲದೆ ಸಲ್ಲಿಸಲಾಗುವ ಅರ್ಜಿಯನ್ನು ತಿರಸ್ಕರಿಸತಕ್ಕದ್ದು. ಒಮ್ಮೆ ಸಂದಾಯ ಮಾಡಿದ ಶುಲ್ಕವು ಮರು ಪಾವತಿಯಾಗತಕ್ಕದ್ದಲ್ಲ.

3. ಆಯ್ಕೆ ಸಮಿತಿಯು ಎರಡು ಲಿಖಿತ ಪರೀಕ್ಷೆಗಳನ್ನು ನಡೆಸತಕ್ಕದ್ದು. ಅದರಲ್ಲಿ ಒಂದು ಪೂರ್ವಭಾವಿ ಪರೀಕ್ಷೆಯಾಗಿರುತ್ತದೆ. ಮತ್ತು ಇನ್ನೊಂದು ಮುಖ್ಯ ಪರೀಕ್ಷೆ ಹಾಗೂ ಮೌಖಿಕ ಪರೀಕ್ಷೆಯಾಗಿರುತ್ತದೆ. ಪೂರ್ವಭಾವಿ ಪರೀಕ್ಷೆಯಲ್ಲಿ ಪ್ರತಿಯೊಂದು ಪತ್ರಿಕೆಗೆ 100 ಅಂಕಗಳಿರುವ ಎರಡು ಪತ್ರಿಕೆಗಳಿರತಕ್ಕದ್ದು. ಅವು ವಸ್ತು ನಿಷ್ಠೆ ಮಾದರಿಯಲ್ಲಿ (Objective type) ಇರತಕ್ಕದ್ದು. ಪ್ರಥಮ ಪತ್ರಿಕೆಯು ಎರಡು ಭಾಗಗಳಲ್ಲಿದ್ದು, ಪ್ರತಿಯೊಂದು ಭಾಗವು 50 ಅಂಕಗಳನ್ನು ಹೊಂದಿರುವಂತೆ ವಿಭಜಿತವಾಗಿರತಕ್ಕದ್ದು. ಪ್ರಥಮ ಭಾಗವು, ಇಂಗ್ಲೀಷ್ ಮತ್ತು ಕನ್ನಡ ಭಾಷೆಯಲ್ಲಿ ಸಮಗ್ರ ಮತ್ತು ಪ್ರಾವೀಣ್ಯವುಳ್ಳ ಪ್ರಶ್ನೆಗಳನ್ನು ಒಳಗೊಂಡ ಸಾಮರ್ಥ್ಯ ಪರೀಕ್ಷೆಯಾಗಿರತಕ್ಕದ್ದು. ದ್ವಿತೀಯ ಭಾಗವು, ಸಾಮಾನ್ಯ ಜ್ಞಾನ ಪರೀಕ್ಷೆಯಾಗಿರತಕ್ಕದ್ದು. ದ್ವಿತೀಯ ಪತ್ರಿಕೆಯು ಅನನ್ಯವಾಗಿ ಕಾನೂನು ವಿಷಯದ ಪ್ರಶ್ನೆಗಳನ್ನು ಕುರಿತದ್ದಾಗಿರತಕ್ಕದ್ದು. ಎರಡೂ ಪತ್ರಿಕೆಗಳಿಗೆ ಪಠ್ಯ ವಿಷಯಗಳನ್ನು ಅನುಬಂಧ IIರಲ್ಲಿ ನಿರ್ದಿಷ್ಟಪಡಿಸಲಾಗಿದೆ. ಮುಖ್ಯ ಪರೀಕ್ಷೆಗೆ ಪಠ್ಯ ವಿಷಯಗಳನ್ನು ಅನುಬಂಧ IIIರಲ್ಲಿ ನಿರ್ದಿಷ್ಟಪಡಿಸಲಾಗಿದೆ.

4. ಪೂರ್ವಭಾವಿ ಪರೀಕ್ಷೆಯಲ್ಲಿ ಆಯ್ಕೆಯಾಗಬೇಕಾದ ಅಭ್ಯರ್ಥಿಗಳ ಸಂಖ್ಯೆಯು 1:10 ರ ಅನುಪಾತದಲ್ಲಿರತಕ್ಕದ್ದು.

5. ಪೂರ್ವಭಾವಿ ಪರೀಕ್ಷೆಯಲ್ಲಿ ಅರ್ಹರಾದ ಅಭ್ಯರ್ಥಿಗಳಿಗೆ ಮುಖ್ಯ ಪರೀಕ್ಷೆಯನ್ನು ನಡೆಸತಕ್ಕದ್ದು. ಮುಖ್ಯ ಪರೀಕ್ಷೆಯು ಪ್ರಬಂಧ ಮಾದರಿಯ ಮೂರು ಪತ್ರಿಕೆಗಳನ್ನು ಒಳಗೊಂಡಿರತಕ್ಕದ್ದು. ಮುಖ್ಯ ಪರೀಕ್ಷೆಯ ಪಠ್ಯ ವಿಷಯಗಳು ಅನುಬಂಧ–III ರಲ್ಲಿ ನಿರ್ದಿಷ್ಟಪಡಿಸಿದಂತಿರತಕ್ಕದ್ದು.

6. ಮುಖ್ಯ ಪರೀಕ್ಷೆಯಿಂದ ಆಯ್ಕೆಯಾಗಬೇಕಾದ ಅಭ್ಯರ್ಥಿಗಳ ಸಂಖ್ಯೆ 1:3ರ ಅನುಪಾತದಲ್ಲಿರತಕ್ಕದ್ದು.

7. ಅಭ್ಯರ್ಥಿಯು ಪೂರ್ವಭಾವಿ ಪರೀಕ್ಷೆ ಮತ್ತು ಮುಖ್ಯ ಪರೀಕ್ಷೆಗಳೆರಡರಲ್ಲೂ ಲಿಖಿತ ಪರೀಕ್ಷೆಯ ಪ್ರತಿಯೊಂದು ಪತ್ರಿಕೆಯಲ್ಲಿ ಶೇಕಡಾ 40ಕ್ಕೆ ಕಡಿಮೆಯಿಲ್ಲದಂತೆ ಅಂಕಗಳನ್ನು ಪಡೆಯತಕ್ಕದ್ದು ಮತ್ತು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅಭ್ಯರ್ಥಿಯ ಸಂದರ್ಭದಲ್ಲಿ ಮೌಖಿಕ ಪರೀಕ್ಷೆಗೆ ಅರ್ಹರಾಗಲು ಪ್ರತಿಯೊಂದು ಪತ್ರಿಕೆಯಲ್ಲಿ ಗರಿಷ್ಠ ಅಂಕಗಳ ಪೈಕಿ ಶೇಕಡಾ 35ಕ್ಕೆ ಕಡಿಮೆಯಿಲ್ಲದಷ್ಟು ಅಂಕಗಳನ್ನು ಪಡೆಯತಕ್ಕದ್ದು.

8. ಮೌಖಿಕ ಪರೀಕ್ಷೆ (ಗರಿಷ್ಠ ಅಂಕಗಳು:25): ಅಭ್ಯರ್ಥಿಯ ಸಾಮಾನ್ಯ ಜ್ಞಾನ, ಕಾನೂನಿನ ತತ್ವಗಳ ಗ್ರಹಿಕೆ ಮತ್ತು ಸಹಾಯಕ ಸರ್ಕಾರಿ ಅಭಿಯೋಜಕರು–ಹಾಗೂ–ಸಹಾಯಕ ಸರ್ಕಾರಿ ವಕೀಲರಾಗಿ ನೇಮಕಗೊಳ್ಳಲು ಆತನು ಸೂಕ್ತರಾಗಿರುವರೇ ಎಂಬುದನ್ನು ಪರೀಕ್ಷಿಸತಕ್ಕದ್ದು.

9. ಆಯ್ಕೆ ಸಮಿತಿಯ ಅಧ್ಯಕ್ಷರು ಮೂರು ವರ್ಷಗಳಿಗೆ ಕಡಿಮೆಯಿಲ್ಲದಂತೆ ಜಿಲ್ಲಾ ನ್ಯಾಯಾಧೀಶನಾಗಿ ಸೇವೆ ಸಲ್ಲಿಸಿರುವ ಜಿಲ್ಲಾ ನ್ಯಾಯಾಧೀಶರನ್ನು ಕಾನೂನು ಪತ್ರಿಕೆಗಳ ಪರೀಕ್ಷಕರನ್ನಾಗಿ ಮತ್ತು ಕೆಲವು ಇತರ ಸೂಕ್ತ ವ್ಯಕ್ತಿಗಳನ್ನು ಇತರ ಪತ್ರಿಕೆಯ ಪರೀಕ್ಷಕರನ್ನಾಗಿ ನೇಮಕ ಮಾಡತಕ್ಕದ್ದು.

10. ಪರಿಶಿಷ್ಟ ಜಾತಿಗಳಿಗೆ, ಪರಿಶಿಷ್ಟ ಪಂಗಡಗಳಿಗೆ ಮತ್ತು ಇತರ ಹಿಂದುಳಿದ ವರ್ಗಗಳಿಗೆ ಹುದ್ದೆಗಳನ್ನು ಮೀಸಲಿಡುವ ಸಂಬಂಧದಲ್ಲಿ ಆಯ್ಕೆ ಸಮಿತಿಯು ಕಾಲಕಾಲಕ್ಕೆ ಜಾರಿಯಲ್ಲಿರುವ ಸರ್ಕಾರಿ ಆದೇಶಗಳಿಗೊಳಪಟ್ಟು, ನಿರ್ದಿಷ್ಟಪಡಿಸಿದ ಕನಿಷ್ಠ ಅರ್ಹತಾ ಅಂಕಗಳನ್ನು ಅಭ್ಯರ್ಥಿಗಳು ಪಡೆದಿರುವುದಕ್ಕೊಳಪಟ್ಟು, ಮೌಖಿಕ ಪರೀಕ್ಷೆಯೂ ಸೇರಿದಂತೆ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದಿರುವ ಒಟ್ಟು ಅಂಕಗಳ ಆಧಾರದ ಮೇಲೆ ಅರ್ಹತೆಯ ಕ್ರಮದಲ್ಲಿ ಗೊತ್ತುಪಡಿಸಿರುವ ಅನುಪಾತಕ್ಕನುಸಾರವಾಗಿ ಸೂಕ್ತ ಅಭ್ಯರ್ಥಿಗಳ ಒಂದು ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು.

11. ನಿಯಮಗಳ ಪ್ರಕಾರ ಆಯ್ಕೆಯಾದ ಅಭ್ಯರ್ಥಿಗಳ ಅಂತಿಮ ಅರ್ಹತಾ ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಅದನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸತಕ್ಕದ್ದು ಮತ್ತು ಅವು ಪ್ರಕಟಣೆಗೊಂಡ ದಿನಾಂಕದಿಂದ ಒಂದು ವರ್ಷದ ಅವಧಿಯವರೆಗೆ ಜಾರಿಯಲ್ಲಿರತಕ್ಕದ್ದು.

## ಅನುಬಂಧ–II

I. ಪೂರ್ವಭಾವಿ ಪರೀಕ್ಷೆಗಾಗಿ ಪಠ್ಯಕ್ರಮ:–

(i) ಪತ್ರಿಕೆ–1 ಭಾಗ–1 (ಅಂಕಗಳು 50) (ವೇಳೆ:ಒಂದು ಘಂಟೆ ಮೂವತ್ತು ನಿಮಿಷಗಳು)
ಸಾಮರ್ಥ್ಯ (ಆಪ್ಟಿಟ್ಯೂಡ್) ಪರೀಕ್ಷೆಯು ಇಂಗ್ಲೀಷ್ ಮತ್ತು ಕನ್ನಡ ಭಾಷೆಯಲ್ಲಿ ಗ್ರಹಿಕೆ ಮತ್ತು ಪ್ರಾವೀಣ್ಯತೆ ಕುರಿತ ಪ್ರಶ್ನೆಗಳನ್ನು ಒಳಗೊಂಡಿರುತ್ತದೆ.

(ii) ಪತ್ರಿಕೆ – I ಭಾಗ–II (ಅಂಕಗಳು 50) (ವೇಳೆ:ಒಂದು ಘಂಟೆ ಮೂವತ್ತು ನಿಮಿಷಗಳು) ಸಾಮಾನ್ಯ ಜ್ಞಾನ–ತಾರ್ಕಿಕ ಮತ್ತು ಬೌದ್ಧಿಕ ಸಾಮರ್ಥ್ಯದ ಪರೀಕ್ಷೆ

(iii) ಪತ್ರಿಕೆ–2 (ಅಂಕಗಳು 100) (ವೇಳೆ: ಮೂರು ಘಂಟೆಗಳು)
ಸಿವಿಲ್ ಪ್ರಕ್ರಿಯಾ ಸಂಹಿತೆ, 1908
ಸೈಬರ್ ಕಾನೂನು,
ಸ್ವತ್ತು ವರ್ಗಾವಣೆ ಅಧಿನಿಯಮ, 1882;
ಭಾರತ ಕರಾರು ಅಧಿನಿಯಮ, 1872;
ನಿರ್ದಿಷ್ಟ ಪರಿಹಾರ ಅಧಿನಿಯಮ, 1963;
ಭಾರತದ ಸಂವಿಧಾನ;

ಕಾಲಪರಿಮಿತಿ ಅಧಿನಿಯಮ;

ದಂಡ ಪ್ರಕ್ರಿಯಾ ಸಂಹಿತೆ, 1973;

ಭಾರತ ದಂಡ ಸಂಹಿತೆ, 1860 ಮತ್ತು

ಭಾರತ ಸಾಕ್ಷ್ಯ ಅಧಿನಿಯಮ, 1872

**ಅನುಬಂಧ–III**

1. ಮುಖ್ಯ ಪರೀಕ್ಷೆಗೆ ಪಠ್ಯ ಕ್ರಮ:–

(i) ಕಾನೂನು ಪತ್ರಿಕೆ–I

(ಗರಿಷ್ಠ ಅಂಕಗಳು 100) (ವೇಳೆ: 3 ಘಂಟೆಗಳು)

(i) ವಿವಾದಾಂಶಗಳನ್ನು ರೂಪಿಸುವುದು

(ii) ಆರೋಪವನ್ನು ರೂಪಿಸುವುದು

(iii) ವಾದಪತ್ರದ ತತ್ವಗಳು

(iv) ವಾದ ಪ್ರತಿವಾದದ ಪತ್ರಗಳ ಕರಡು ತಯಾರಿಸುವುದು

(ii) ಕಾನೂನು ಪತ್ರಿಕೆ –II

(ಗರಿಷ್ಠ ಅಂಕಗಳು 100) (ವೇಳೆ: 3 ಘಂಟೆಗಳು)

(i) ದಂಡ ಪ್ರಕ್ರಿಯಾ ಸಂಹಿತೆ, 1973

(ii) ಭಾರತ ಸಾಕ್ಷ್ಯ ಅಧಿನಿಯಮ, 1872

(iii) ಭಾರತ ದಂಡ ಸಂಹಿತೆ, 1860

(iii) ಕಾನೂನು ಪತ್ರಿಕೆ –III

(ಗರಿಷ್ಠ ಅಂಕಗಳು 100) (ವೇಳೆ: 3 ಘಂಟೆಗಳು)

(i) ಭಾರತದ ಸಂವಿಧಾನ

(ii) ಸೈಬರ್ ಕಾನೂನುಗಳು

(iii) ಸಿವಿಲ್ ಪ್ರಕ್ರಿಯಾ ಸಂಹಿತೆ, 1908

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ.ನಿಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಗೃಹ ಇಲಾಖೆ
(ಪೊಲೀಸ್ ಸೇವೆಗಳು–ಬಿ)

**ಪಿ.ಆರ್. 622**

## HOME SECRETARIAT

**No.HD:155:POP:2012 Bangalore, Dated:14/08/2012.**

**NOTIFICATION**

In exercise of the powers conferred by the clause(s) of Section 2 of the code of Criminal Procedure 1973 (Central Act 2 of 1974), the Government of Karnataka, hereby declare that with effect from the date of publication of this Notification in the Official Gazette, the areas and places specified in column (3) of the schedule below, shall cease to be within the jurisdiction of the Police Station specified in column (4) thereof and the said areas and places shall be included in the Police Station specified in column (2) thereof.

**SCHEDULE**

| Name of the Unit/Sub-Division/ Circle | Name of the police station in which the areas and places mentioned in column (3) shall be included | Name of the areas and places | Name of the Police Station from the jurisdiction of which the areas and places mentioned in column (3) shall be excluded |
|---|---|---|---|
| (1) | (2) | (3) | (4) |
| Bangalore Dist / Bangalore Sub-Division / Anekal Circle | Jigani Police Station | 1. Jigani<br>2. Jigani Industrial area<br>3. Bande Nallasandra<br>4. Kyalasanahalli<br>5. Vabasandra<br>6. Nanjiapura<br>7. Koppa<br>8. Koppa gate<br>9. Harappana halli.<br>10. Bukkasagara<br>11. Kallu Balu<br>12. Vaderamanchanahalli<br>13. Konasandra<br>14. Veerasandra<br>15. Giddenahalli (Prashanti Kuteera)<br>16. Mutthurayana Doddi<br>17. Krishnaiahana Doddi<br>18. Yellammana Doddi.<br>19. Nisarga Layout<br>20. Thapovana Layout<br>21. Mahantha Lingapura | Bannerghatta Police Station |

| Name of the Unit/Sub-Division/ Circle | Name of the police station in which the areas and places mentioned in column (3) shall be included | Name of the areas and places | Name of the Police Station from the jurisdiction of which the areas and places mentioned in column (3) shall be excluded |
|---|---|---|---|
| (1) | (2) | (3) | (4) |
| | | 22. Madapatna<br>23. Vaddarapalya<br>24. Dyavasandra<br>25. Bommandahalli<br>26. Nosenooru<br>27. Nosenooru Gollalli<br>28. Kadu Jakkanahalli<br>29. Haragadde.<br>30. Sheethanayakanahalli<br>31. Nayanahalli.<br>32. Lingapura<br>33. Kumbaranahalli.<br>34. Kumbaranahalli colony | Anekal Police Station |
| | | 35. Rajapura<br>36. Hinnakki<br>37. Masthenahalli<br>38. Masthenahalli colony<br>39. Sri Ramapura | Hebbagodi Police Station |

By Order and in the name of the Governor of Karnataka,

**H.R. Putte Gowda**

**PR - 616**

Under Secretary to Government,

Home Department, (Police Expenditure)

## HOME SECRETARIAT

**No.HD:163:POP:2012 Bangalore, Dated:07/09/2012.**

**NOTIFICATION**

In exercise of the powers conferred by the clause(s) of section 2 of the Code of Criminal Procedure, 1973 (Central Act 2 of 1974), the Government of Karnataka, hereby declare that with effect from the date of publication of this notification in the Official Gazette, the areas and places specified in column (3) of the schedule below, shall cease to be within the jurisdiction of the police station specified in column (4) thereof and the said areas and places shall be included in the police station specified in column (2) thereof.

**SCHEDULE**

| Name of the District/ Sub-Division/Circle | Police Station in which the areas and places mentioned in column (3) shall be included | Name of the areas and places | Police Station from whose jurisdiction the areas and places mentioned in column (3) shall be excluded |
|---|---|---|---|
| (1) | (2) | (3) | (4) |
| Shimoga/District<br>Shimoga Sub-Division<br>Kote Cirle | Shimoga (East) Traffic Police Station | 1. M.R.S. Circle<br>2. Holehonnur Cross<br>3. Shanakar Mata Circle<br>4. K.E.B. Circle<br>5. Mahaveer Circle<br>6. Shivamurthy Circle<br>7. Usha Nursing Home Circle<br>8. DVS Circle<br>9. Veerabhadra Talkies Cross<br>10. Shivappa Nayaka Circle<br>11. Ameer Ahmed Circle<br>12. Jail Circle<br>13. Lakshmi TAlkies Circle<br>14. Gopi Circle<br>15. Old Bar Line Road<br>16. Pension Mohalla<br>17. Rajeev Gandhi Extension<br>18. Vidyanagara<br>19. Sugar Factory<br>20. KADA Office<br>21. Purale<br>22. Thopinaghata<br>23. Malalakoppa(Soolebylu)<br>24. Indiranagara<br>25. Tank Mohalla<br>26. Sheshadripuram<br>27. Basavanguri<br>28. Hanumanthanagara<br>29. Rajedranagara<br>30. Keerthinagara<br>31. Venkateshwara<br>32. Tilaknagara<br>33. Basaveshwaranagara<br>34. Tyavare Chatnahalli<br>35. Malleshwaranagara<br>36. Madiripalya<br>37. Malavagoppa | Shimoga (west) Traffic Police Station |

| Name of the District/ Sub-Division/Circle | Police Station in which the areas and places mentioned in column (3) shall be included | Name of the areas and places | Police Station from whose jurisdiction the areas and places mentioned in column (3) shall be excluded |
|---|---|---|---|
| (1) | (2) | (3) | (4) |
| | | 38. Nidhige<br>39. Gandhi Bazar Road (upto Border end of west Traffic Police Station)<br>40. Nehru Road (upto Border end of West Traffic Police Station)<br>41. Durgigundi Road (upto Border end of West Traffic Police Station)<br>42. Jail Road (upto Border end of West Traffic Police Station)<br>43. Vinobhanagara Medhara Keri Road (upto Border end of West Traffic Police Station)<br>44. Savalanga Road (upto Border end of West Traffic Police Station<br>45. Savalanga Road Ragigudda.<br>46. Honnalli Road<br>47. From Shivappanayaka Circle to A.A. Circle<br>48. Shankar Mata Road.<br>49. Balaraj Urs Road.<br>50. Holehonnur Road.<br>51. Right side of Tunganagara river.<br>52. Bye-Pass Road, MRS, Sugar Factory and CADA Office.<br>53. N.R. Pura Road upto Topinaghatta.<br>54. Soolebylu.<br>55. Malalikoppa. | |

The Traffic Police Station specified in column (2) shall be responsible for investigation of the offences under:-

1. the Karnataka Traffic Control Act, 1960 (Karnataka Act No.18 of 1960)
2. the Karnataka Traffic (Control of Public Vehicles) Rules 1979
3. the Karnataka Traffic Control (Regulation of Traffic on Highways) Rules, 1979 and the Karnataka Traffic Control Rules, 1979
4. the Motor Vehicles Act, 1988 (Central Act 59 of 1988) and the Karnataka Motor Vehicles Rules, 1989
5. offences under sections 279, 304(A), 337, 338 and 427 of Indian Penal Code, 1860.

By Order and in the name of the Governor of Karnataka,

**H.R. Putte Gowda**
Under Secretary to Government,
Home Department,
(Police Expenditure)

PR - 617